# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1462

ಸದಸ್ಯರ ಹೆಸರು : ಡಾ॥ ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 19–03–2020

ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

***

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೆಲಸ ನಿರ್ವಹಿಸುತ್ತಿರುವ ಉಷ್ಣ ವಿದ್ಯುತ್ ಸ್ಥಾವರ (ಥರ್ಮಲ್ ಪವರ್ ಪ್ಲಾಂಟ್)ಗಳಿಂದ ಪರಿಸರ ಮಾಲಿನ್ಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಕೆಲಸ ನಿರ್ವಹಿಸುತ್ತಿರುವ ಉಷ್ಣ ವಿದ್ಯುತ್ ಸ್ಥಾವರ (ಥರ್ಮಲ್ ಪವರ್ ಪ್ಲಾಂಟ್)ಗಳಿಂದ ಪರಿಸರ ಮಾಲಿನ್ಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದರೆ, ಈ ಮಾಲಿನ್ಯವನ್ನು ತಡೆಗಟ್ಟಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ಅರಣ್ಯ ಮತ್ತು ಪರಿಸರ ಇಲಾಖೆಯ ನಿರ್ದೇಶನದಂತೆ, ಆರ್‌ಟಿಪಿಸ್ ಯೋಜನಾ ಪ್ರದೇಶದಲ್ಲಿ ಪರಿಸರವನ್ನು ಕಾಯ್ದುಕೊಳ್ಳಲು 1985 ರಿಂದ 2009–10 ರ ಸಾಲಿನವರೆಗೆ ಹಂತ ಹಂತವಾಗಿ ಒಟ್ಟು 388.79 Ha. (960.700 ಎಕರೆಗಳು) ಪ್ರದೇಶದಲ್ಲಿ ಗಿಡ ಮರಗಳನ್ನು ಬೆಳಸಲಾಗಿದೆ. ಮುಂದುವರೆದಂತೆ, ಆರ್‌ಟಿಪಿಎಸ್ ಯೋಜನಾ ಪ್ರದೇಶದಲ್ಲಿ ಲಭ್ಯವಿರುವ ಎಲ್ಲಾ ಜಾಗದಲ್ಲಿ ಗಿಡ–ಮರಗಳನ್ನು ನೆಡಲಾಗಿದೆ.<br><br>ಪರಿಸರ, ಅರಣ್ಯ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯವು ದಿನಾಂಕ 07.12.2015ರಂದು ಹೊರಡಿಸಿದ ಗೆಜೆಟ್‌ನ ಕಂಡಿಕೆ ಎಸ್.ಓ.3305ರ ಪ್ರಕಾರ ಆರ್.ಟಿ.ಪಿ.ಎಸ್, ವೈ.ಟಿ.ಪಿ.ಎಸ್ ಮತ್ತು ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಕೇಂದ್ರಗಳ ಕೊಳವೆ ಅನಿಲದ ಮಾಲಿನ್ಯವನ್ನು ತಡೆಗಟ್ಟುವ ಸಲುವಾಗಿ "ತೋಯ್ದು ಸುಣ್ಣದಕಲ್ಲಿನ ಕೊಳವೆ ಅನಿಲ ನಿರ್ಗಂಧಕೀಕರಣ ವ್ಯವಸ್ಥೆಯನ್ನು" ಅಳವಡಿಸಲು ಕರ್ನಾಟಕ e-portal ಮುಖಾಂತರ ವೈ.ಟಿ.ಪಿ.ಎಸ್, ಆರ್.ಟಿ.ಪಿ.ಎಸ್ ಹಾಗೂ ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಕೇಂದ್ರಕ್ಕೆ ದೇಶಿಯ ಸ್ಪರ್ಧಾತ್ಮಕ ಬಿಡ್ಡಿಂಗ್ ಮೂಲಕ ಟೆಂಡರ್ ಆಹ್ವಾನಿಸಲಾಗಿದೆ. ಪ್ರಸ್ತುತ ಟೆಂಡರ್‌ಗಳು ಮೌಲ್ಯಮಾಪನದ ಪ್ರಕ್ರಿಯೆ ಹಂತದಲ್ಲಿರುತ್ತವೆ. |
| ಇ) | ಕೇಂದ್ರ ಸರ್ಕಾರದ ಆಶಯದಂತೆ ಈ ಉಷ್ಣ ವಿದ್ಯುತ್ ಸ್ಥಾವರಗಳನ್ನು ಮುಚ್ಚುವ ನಿರ್ಧಾರ ಸರ್ಕಾರದ ಮುಂದೆ ಇದೆಯೇ; | ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಈ | ಇದರ ಬಗ್ಗೆ ವಿವರಗಳನ್ನು ನೀಡುವುದು? | ಅನ್ವಯಿಸುವುದಿಲ್ಲ. |

**ಸಂಖ್ಯೆ:** ಎನರ್ಜಿ 74 ಇಬಿಎಸ್ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ